ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**
ನೂರ ನಲವತ್ತೊಂದನೆಯ ಅಧಿವೇಶನ
ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ಲಾಕ್‌ಡೌನ್ ಸಂದರ್ಭದಲ್ಲಿ ಸಾರಿಗೆ ವ್ಯವಸ್ಥೆ ಸ್ಥಗಿತಗೊಂಡಿದ್ದಾಗ ನೌಕರರ ಸಂಕಷ್ಟ ಕುರಿತು

ಶ್ರೀ ಹೆಚ್.ಎಂ. ರಮೇಶಗೌಡ (ವಿಧಾನಸಭೆಯಿಂದ ಚುನಾಯಿತರಾದವರು) -

73 (754) ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಲಾಕ್‌ಡೌನ್ ಸಂದರ್ಭದಲ್ಲಿ ಸಾರಿಗೆ ಸೇವೆ ಸ್ಥಗಿತಗೊಂಡಿದ್ದಾಗ ಸಾರಿಗೆ ನೌಕರರು ಅನುಭವಿಸಿದ ಸಂಕಷ್ಟಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ;

(ಆ) ಸಾರಿಗೆ ನೌಕರರಿಗೆ ಪೂರ್ಣ ವೇತನ ಪಾವತಿಯಾಗಿಲ್ಲ ಎನ್ನುವ ಕೂಗು ಕೇಳಿ ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಪೂರ್ಣ ವೇತನ ಪಾವತಿಗೆ ಸರ್ಕಾರ ಗಮನ ಹರಿಸುತ್ತದೆಯೇ;

(ಇ) ಸಾರಿಗೆ ನೌಕರರ ವೇತನ ಸಮಸ್ಯೆಗೆ ಸರ್ಕಾರದ ಮುಂದೆ ಇರುವ ಶಾಶ್ವತ ಪರಿಹಾರಗಳೇನು; (ವಿವರ ನೀಡುವುದು)

(ಈ) ಸಾರಿಗೆ ನಿಗಮವೇ ಸಾರಿಗೆ ನೌಕರರಿಗೆ ಒಂದು ವರ್ಷ ವೇತನ ರಹಿತ ರಜೆ ಮಂಜೂರು ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಯಾವ ಕಾರಣಕ್ಕಾಗಿ ನಿಗಮ ಹೀಗೆ ಮಾಡುತ್ತಿದೆ; (ಸಂಪೂರ್ಣ ವಿವರ ನೀಡುವುದು)

(ಉ) ಸಾರಿಗೆ ನೌಕರರು ಇತ್ತೀಚಿನ ದಿನಗಳಲ್ಲಿ ದಿನನಿತ್ಯ ಆತ್ಮಹತ್ಯೆಗೆ ಶರಣಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಗಮನಕ್ಕೆ ಬಂದಿದ್ದಲ್ಲಿ, ಈ ನೌಕರರ ಸರಣಿ ಆತ್ಮಹತ್ಯೆ ತಪ್ಪಿಸಲು ಸರ್ಕಾರ ಯಾವ ಕ್ರಮ ಕೈಗೊಳ್ಳಲಿದೆ?